## ಕರ್ನಾಟಕ ವಿಧಾನ ಪರಿಷತ್

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 975 (1025) |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಎಸ್. ರವಿ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 21-09-2021 |
| ಉತ್ತರಿಸುವ ಸಚಿವರು | : | ಪೌರಾಡಳಿತ, ಸಣ್ಣ ಕೈಗಾರಿಕೆ, ಸಾರ್ವಜನಿಕ ವಲಯ ಉದ್ಯಮಗಳ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಮನಗರ ಮತ್ತು ಚನ್ನಪಟ್ಟಣ ನಗರಸಭೆಗಳ ವ್ಯಾಪ್ತಿಯಲ್ಲಿ ಉತ್ಪತ್ತಿಯಾಗುತ್ತಿರುವ ಘನತ್ಯಾಜ್ಯ ವಿಲೇವಾರಿಗೆ ಸ್ಥಳ ಗುರುತಿಸಲಾಗಿದೆಯೇ; ಗುರುತಿಸಲಾಗಿದ್ದಲ್ಲಿ, ಅಲ್ಲಿ ಕೈಗೊಂಡಿರುವ ಅಭಿವೃದ್ಧಿ ಕಾರ್ಯಗಳೇನು ಹಾಗೂ ಅದಕ್ಕೆ ತಗಲುವ ವೆಚ್ಚವೆಷ್ಟು; | <u>ರಾಮನಗರ ನಗರಸಭೆ:</u><br>ರಾಮನಗರ ನಗರಸಭೆ ವ್ಯಾಪ್ತಿಯಲ್ಲಿ ಉತ್ಪತ್ತಿಯಾಗುತ್ತಿರುವ ಘನತ್ಯಾಜ್ಯ ವಸ್ತುಗಳನ್ನು ಸಂಸ್ಕರಿಸಿ ವಿಲೇವಾರಿ ಮಾಡಲು ರಾಮನಗರ ತಾಲ್ಲೂಕು, ಕೂಟಗಲ್ ಹೋಬಳಿ, ಚಾಮನಹಳ್ಳಿಯ ಸರ್ವೆ ನಂ. 254 ರಲ್ಲಿ 30.00 ಎಕರೆ ಜಾಗವನ್ನು ಗುರುತಿಸಲಾಗಿದ್ದು. ಈ ಜಾಗದಲ್ಲಿ ಕೈಗೊಂಡಿರುವ ಕಾಮಗಾರಿಗಳು ಮತ್ತು ವೆಚ್ಚದ ವಿವರ ಈ ಕೆಳಕಂಡಂತಿವೆ.<br>1. ಸ್ಯಾನಿಟರಿ ಲ್ಯಾಂಡ್‌ಫಿಲ್ ಅಭಿವೃದ್ಧಿಗಾಗಿ ಹೆಚ್.ಡಿ.ಪಿ.ಇ ಜಿಯೋ-ಮೆಂಬ್ರೇನ್ ಮತ್ತು ಜಿಯೋ-ಟೆಕ್ಸ್‌ಟೈಲ್ ಲೈನರ್ ಅಳವಡಿಸುವ ಕಾಮಗಾರಿಗಳನ್ನು ರೂ. 34.00 ಲಕ್ಷ ವೆಚ್ಚದಲ್ಲಿ ಪೂರ್ಣಗೊಳಿಸಲಾಗಿರುತ್ತದೆ.<br>2. ಸೆಗ್ರೀಗೇಷನ್ ಮೆಷಿನ್ ಅಳವಡಿಸಲು ಕಾಂಕ್ರೀಟ್ ಪ್ಲಾಟ್‌ಫಾರಂ ಕಾಮಗಾರಿ ರೂ. 4.80 ಲಕ್ಷಗಳ ವೆಚ್ಚದಲ್ಲಿ ಪೂರ್ಣಗೊಳಿಸಲಾಗಿರುತ್ತದೆ.<br>3. ನೆಲಭರ್ತಿ ಜಾಗದ ಪ್ರದೇಶದಲ್ಲಿ ಬದಿ ಏರಿ ರಚನೆ ಹಾಗೂ ಕೆರೆ ಮಣ್ಣು ಹಾಸುವ ಕಾಮಗಾರಿಯನ್ನು ರೂ. 15.00 ಲಕ್ಷಗಳ ವೆಚ್ಚದಲ್ಲಿ ಪೂರ್ಣಗೊಳಿಸಲಾಗಿರುತ್ತದೆ.<br>4. ವಾಚ್‌ಮೆನ್ ಶೆಡ್ ನಿರ್ಮಾಣ ಮತ್ತು ಬೋರ್‌ವೆಲ್ ಕೊರೆಯುವ ಕಾಮಗಾರಿಗಳನ್ನು ರೂ. 8.50 ಲಕ್ಷಗಳ ವೆಚ್ಚದಲ್ಲಿ ಪೂರ್ಣಗೊಳಿಸಲಾಗಿರುತ್ತದೆ.<br>5. ಎರೆಹುಳು ಗೊಬ್ಬರ ಘಟಕದ ನಿರ್ಮಾಣವನ್ನು ರೂ. 10.00 ಲಕ್ಷಗಳ ವೆಚ್ಚದಲ್ಲಿ ಪೂರ್ಣಗೊಳಿಸಲಾಗಿರುತ್ತದೆ.<br><br>ಆದರೆ ಸದರಿ ಜಾಗದಲ್ಲಿ ತ್ಯಾಜ್ಯ ವಿಲೇವಾರಿ ಮಾಡಲು ಸುತ್ತಮುತ್ತಲ್ಲಿನ ನಿವಾಸಿಗಳು ಹಾಗು ಸಾರ್ವಜನಿಕರು 2015ನೇ ಸಾಲಿನಿಂದ ವಿರೋಧ ವ್ಯಕ್ತಪಡಿಸುತ್ತಿದ್ದು, ಇದರಿಂದಾಗಿ ತ್ಯಾಜ್ಯ ಸಂಸ್ಕರಣೆ ಕಾರ್ಯ ಹಾಗೂ ಬಾಕಿ ಉಳಿದ ಕಾಮಗಾರಿಗಳನ್ನು ಕೈಗೊಳ್ಳಲು ಸಾಧ್ಯವಾಗಿರುವುದಿಲ್ಲ. ಈ ನಿಟ್ಟಿನಲ್ಲಿ ನಗರಸಭೆಯು ತ್ಯಾಜ್ಯ ಸಂಸ್ಕರಣೆ ಬದಲೀ ಜಾಗವನ್ನು ಗುರುತಿಸುವ ಹಂತದಲ್ಲಿರುತ್ತದೆ.<br><br><u>ಚನ್ನಪಟ್ಟಣ ನಗರಸಭೆ:</u><br>ಚನ್ನಪಟ್ಟಣ ನಗರಸಭೆ ವ್ಯಾಪ್ತಿಯಲ್ಲಿ ಉತ್ಪತ್ತಿಯಾಗುವ ಘನತ್ಯಾಜ್ಯ ವಸ್ತುಗಳನ್ನು ಸಂಸ್ಕರಣೆ ಮತ್ತು ವಿಲೇವಾರಿ ಮಾಡಲು ರಾಮನಗರ ತಾಲ್ಲೂಕು, ಕೂಟಗಲ್ ಹೋಬಳಿ, ಚಾಮನಹಳ್ಳಿ ಸರ್ವೆ ನಂ. 254 ರಲ್ಲಿ |

| | | |
|---|---|---|
| | | 20 ಎಕರೆ ಜಮೀನನ್ನು ಗುರುತಿಸಲಾಗಿರುತ್ತದೆ. ಸದರಿ ಜಾಗದ ಬಗ್ಗೆ ತಕರಾರು ಇರುವುದರಿಂದ ನೆಲಭರ್ತಿ ಜಾಗವನ್ನು ಪ್ರಸ್ತುತ ಉಪಯೋಗಿಸಲಾಗುತ್ತಿಲ್ಲ. ಸಾರ್ವಜನಿಕ ಪ್ರತಿರೋಧಕ್ಕೆ ಮೊದಲು ಈ ಜಾಗದಲ್ಲಿ ಕೈಗೊಂಡಿರುವ ಕಾಮಗಾರಿಗಳು ಮತ್ತು ವೆಚ್ಚದ ವಿವರಗಳು ಕೆಳಕಂಡಂತಿವೆ.<br>1. ಘನತ್ಯಾಜ್ಯ ಸಂಸ್ಕರಣಾ ಘಟಕದ ಜಾಗದ ಸುತ್ತಲೂ ಗೋಡೆ ನಿರ್ಮಾಣ ಕಾರ್ಯವನ್ನು ರೂ. 8.23 ಲಕ್ಷಗಳ ವೆಚ್ಚದಲ್ಲಿ ಹಾಗೂ ಫೆನ್ಸಿಂಗ್ ಕಾರ್ಯವನ್ನು ರೂ. 8.00 ಲಕ್ಷಗಳ ವೆಚ್ಚದಲ್ಲಿ ಪೂರ್ಣಗೊಳಿಸಲಾಗಿರುತ್ತದೆ.<br>2. ಘನತ್ಯಾಜ್ಯ ಸಂಸ್ಕರಣಾ ಘಟಕದ ಜಾಗದಲ್ಲಿ ಕಲ್ವರ್ಟ್ ಹಾಗೂ ಡೆಕ್‌ಸ್ಲಾಬ್ ನಿರ್ಮಾಣವನ್ನು ರೂ. 6.04 ಲಕ್ಷಗಳ ವೆಚ್ಚದಲ್ಲಿ ಪೂರ್ಣಗೊಳಿಸಲಾಗಿರುತ್ತದೆ.<br>3. ಘನತ್ಯಾಜ್ಯ ಸಂಸ್ಕರಣಾ ಘಟಕ ಜಾಗದಲ್ಲಿ ರಸ್ತೆ ಅಭಿವೃದ್ಧಿ ಹಾಗೂ ರೆವೆಟ್ಮೆಂಟ್ ಕೆಲಸ ನಿರ್ಮಾಣವನ್ನು ರೂ. 10.00 ಲಕ್ಷಗಳ ವೆಚ್ಚದಲ್ಲಿ ಪೂರ್ಣಗೊಳಿಸಲಾಗಿರುತ್ತದೆ.<br><br>ಈ ನಿಟ್ಟಿನಲ್ಲಿ ತ್ಯಾಜ್ಯ ವಿಲೇವಾರಿಗಾಗಿ ಸೂಕ್ತ ಬದಲಿ ಜಾಗವನ್ನು ಗುರುತಿಸಿ ನಗರಸಭೆಗೆ ಹಸ್ತಾಂತರಿಸಲು ಪ್ರಸ್ತಾವನೆಯನ್ನು ಜಿಲ್ಲಾಧಿಕಾರಿಗಳಿಗೆ ನಗರಸಭೆ ವತಿಯಿಂದ ಸಲ್ಲಿಸಲಾಗಿದ್ದು, ಬದಲಿ ಜಾಗವನ್ನು ಗುರುತಿಸುವ ಪ್ರಕ್ರಿಯೆ ಜಾರಿಯಲ್ಲಿರುತ್ತದೆ. |
| (ಆ) | ರಾಮನಗರ ಮತ್ತು ಚನ್ನಪಟ್ಟಣ ನಗರಗಳಲ್ಲಿ ಉತ್ಪತಿಯಾಗುತ್ತಿರುವ ಒಟ್ಟು ತ್ಯಾಜ್ಯ ಎಷ್ಟು; ವಿಲೇವಾರಿಗೆ ಕೈಗೊಳ್ಳುತ್ತಿರುವ ಕ್ರಮವೇನು; ಖಾಸಗಿಯವರಿಗೆ ವಹಿಸಲಾಗಿದೆಯೇ; ವಹಿಸಿದ್ದಲ್ಲಿ ಅನುಸರಿಸಲಾಗಿರುವ ಮಾನದಂಡಗಳೇನು? | <u>**ರಾಮನಗರ ನಗರಸಭೆ**</u><br>ರಾಮನಗರ ನಗರಸಭೆ ವ್ಯಾಪ್ತಿಯಲ್ಲಿ ಪ್ರತಿ ದಿನ ಅಂದಾಜು 40 ಟನ್ ತ್ಯಾಜ್ಯ ಉತ್ಪತ್ತಿಯಾಗುತ್ತಿದ್ದು. ಘನತ್ಯಾಜ್ಯ ನಿರ್ವಹಣೆ ಕಾರ್ಯವನ್ನು ಯಾವುದೆ ಖಾಸಗಿ ಸಂಸ್ಥೆಗೆ ವಹಿಸದೆ ನಗರಸಭೆ ವತಿಯಿಂದ ಒಟ್ಟು 16 ಆಟೋಟಿಪ್ಪರ್, 2 ಟ್ರಾಕ್ಟರ್, 2 ಜೆ.ಸಿ.ಬಿ, 4 ಟಿಪ್ಪರ್ ಮತ್ತು 2 ಕಾಂಪ್ಯಾಕ್ಟರ್ ಮೂಲಕ ಸಂಗ್ರಹಣೆ ಮತ್ತು ಸಾಗಣೆ ಮಾಡಲಾಗುತ್ತಿದೆ.<br><br>ಘನತ್ಯಾಜ್ಯ ನಿರ್ವಹಣೆ ಸಂಬಂಧ ನಗರಸಭೆಯು ಕೈಗೊಂಡ ಕ್ರಮಗಳು ಕೆಳಕಂಡಂತಿವೆ.<br>1. ನಗರಸಭೆ ವ್ಯಾಪ್ತಿಯ ಎಲ್ಲಾ 31 ವಾರ್ಡ್‌ಗಳಲ್ಲಿ ಅಂದಾಜು 38 ಟನ್‌ಗಳಷ್ಟು ತ್ಯಾಜ್ಯ ಸಂಗ್ರಹಣೆಯಾಗುತ್ತಿದ್ದು (ಶೇ. 95 ರಷ್ಟು ಪ್ರಗತಿ) ಹಾಗೂ ಸಂಗ್ರಹಣೆಯಾದ ಒಟ್ಟು ತ್ಯಾಜ್ಯದಲ್ಲಿ ಶೇ. 38 ರಷ್ಟು ತ್ಯಾಜ್ಯ ವಿಕೇಂದ್ರೀಕೃತವಾಗಿ ಸಂಸ್ಕರಣೆ ಮಾಡಲಾಗುತ್ತಿದೆ.<br><br>2. ರಾಮನಗರ ನಗರಸಭೆಯು ವಾರ್ಡ್ ನಂ. 01, 04, 27 ಮತ್ತು 31 ರಲ್ಲಿ ಒಟ್ಟು 10 ಟಿಪಿಡಿ ಸಾಮರ್ಥ್ಯದ ವಿಕೇಂದ್ರೀಕೃತ ಕಾಂಪೋಸ್ಟ್ ಘಟಕಗಳನ್ನು ಸ್ಥಾಪಿಸಲಾಗಿದ್ದು, ಸದರಿ ವಿಕೇಂದ್ರಿಕೃತ ಘಟಕಗಳಲ್ಲಿ ಘನ ತ್ಯಾಜ್ಯ ಸಂಸ್ಕರಣೆ ಮಾಡಿ ಒಟ್ಟು 8.3 ಟಿಪಿಡಿ ಹಸಿ ತ್ಯಾಜ್ಯವನ್ನು ಸಂಸ್ಕರಿಸಲು ಹಾಗೂ 1.5 ಟಿಪಿಡಿ ತ್ಯಾಜ್ಯವನ್ನು ಮರುಬಳಕೆ ಮಾಡಲು ಕ್ರಮ ವಹಿಸಲಾಗಿದೆ. |

| | | |
|---|---|---|
| | | 3. ವಾರ್ಡ್ ನಂ. 01 ರಲ್ಲಿ ಹೋಟೆಲ್‌ಗಳಿಂದ ಉತ್ಪತ್ತಿಯಾಗುವ ತ್ಯಾಜ್ಯದಿಂದ 01 ಟಿಪಿಡಿ ಸಾಮರ್ಥ್ಯದ ಬಯೋ-ಮೆಥನೇಷನ್ ಘಟಕದ ಮೂಲಕ ವಿದ್ಯುತ್ ತಯಾರಿಕೆ ಮಾಡಲು ಕ್ರಮ ವಹಿಸಲಾಗಿದೆ.<br>ಪ್ರಸ್ತುತ ಘನತ್ಯಾಜ್ಯ ನಿರ್ವಹಣೆ ಕಾರ್ಯವನ್ನು ಯಾವುದೇ ಖಾಸಗಿ ಸಂಸ್ಥೆಗೆ ವಹಿಸದೆ ನಗರಸಭೆ ವತಿಯಿಂದ ನಿರ್ವಹಿಸಲಾಗುತ್ತಿದೆ.<br><br>**<u>ಚನ್ನಪಟ್ಟಣ ನಗರಸಭೆ</u>**<br>ಚನ್ನಪಟ್ಟಣ ನಗರಸಭಾ ವ್ಯಾಪ್ತಿಯಲ್ಲಿ ಪ್ರತಿ ದಿನ 36 ಟನ್ ತ್ಯಾಜ್ಯ ಉತ್ಪತ್ತಿಯಾಗುತ್ತಿದ್ದು, ತ್ಯಾಜ್ಯ ನಿರ್ವಹಣೆಯನ್ನು ಯಾವುದೆ ಖಾಸಗಿ ಸಂಸ್ಥೆಗೆ ವಹಿಸದೆ ನಗರಸಭೆ ವತಿಯಿಂದ ಒಟ್ಟು 19 ಆಟೋಟಿಪ್ಪರ್, 3 ಟ್ರಾಕ್ಟರ್, 2 ಜೆ.ಸಿ.ಬಿ, 3 ಟಿಪ್ಪರ್ ಮತ್ತು 2 ಕಾಂಪ್ಯಾಕ್ಟರ್ ಮೂಲಕ ತ್ಯಾಜ್ಯ ಸಂಗ್ರಹಿಸಿ, ಸಾಗಣೆ ಮಾಡಲಾಗುತ್ತಿದೆ.<br><br>ಘನತ್ಯಾಜ್ಯ ನಿರ್ವಹಣೆ ಸಂಬಂಧ ನಗರಸಭೆಯು ತೆಗೆದುಕೊಂಡಿರುವ ಕ್ರಮಗಳು ಕೆಳಕಂಡಂತಿವೆ.<br><br>1) ನಗರಸಭೆ ವ್ಯಾಪ್ತಿಯ ಎಲ್ಲಾ 31 ವಾರ್ಡ್‌ಗಳಲ್ಲಿ ಮನೆ-ಮನೆಗಳಿಂದ ಅಂದಾಜು 32 ಟನ್‌ಗಳಷ್ಟು ತ್ಯಾಜ್ಯ ಸಂಗ್ರಹಣೆಯನ್ನು (84 % ರಷ್ಟು ಪ್ರಗತಿ) ಮಾಡಲಾಗುತ್ತಿದೆ. ಸಂಗ್ರಹಣೆಯಾದ ಒಟ್ಟು ತ್ಯಾಜ್ಯದ ಪೈಕಿ ಶೇ. 22 ರಷ್ಟು ತ್ಯಾಜ್ಯ ಸಂಸ್ಕರಣೆ ಮಾಡಲಾಗುತ್ತಿದೆ.<br>2) ವಾರ್ಡ್ ನಂ. 10 ಹಾಗೂ 12 ರಲ್ಲಿ, 4 ಟಿ.ಪಿ.ಡಿ ಸಾಮರ್ಥ್ಯದ ವಿಕೇಂದ್ರಿಕೃತ ತ್ಯಾಜ್ಯ ಸಂಸ್ಕರಣಾ ಘಟಕಗಳಲ್ಲಿ ಹಸಿ ತ್ಯಾಜ್ಯ ಸಂಸ್ಕರಣೆ ಮಾಡಲಾಗುತ್ತಿದೆ.<br>3) ವಾರ್ಡ್ ನಂ. 15ರಲ್ಲಿ, 3 ಟಿ.ಪಿ.ಡಿ ಸಾಮರ್ಥ್ಯದ ವಿಕೇಂದ್ರಿಕೃತ ತ್ಯಾಜ್ಯ ಸಂಸ್ಕರಣಾ ಘಟಕದ ಕಾಮಗಾರಿಗಳು ಪ್ರಗತಿಯಲ್ಲಿರುತ್ತದೆ.<br>4) ಹಸಿ ತ್ಯಾಜ್ಯ ಸಂಸ್ಕರಣೆಯಿಂದ ತಯಾರಿಸಿದ ಗೊಬ್ಬರದಿಂದ ನಗರಸಭೆಯ ಉದ್ಯಾನದಲ್ಲಿ ಹಸಿರೀಕರಣಕ್ಕಾಗಿ ಬಳಸಲಾಗುತ್ತಿದೆ.<br>5) ಕಛೇರಿಯ ಆವರಣದಲ್ಲಿ 1 ಟಿ.ಪಿ.ಡಿ ಸಾಮರ್ಥ್ಯದಲ್ಲಿ ಬಯೋ-ಮೆಥನೇಷನ್ ಘಟಕವನ್ನು ನಿರ್ಮಿಸಲಾಗಿದ್ದು, ಹಸಿಕಸದಿಂದ ವಿದ್ಯುತ್ ತಯಾರಿಕೆಗೆ ಕ್ರಮ ವಹಿಸಲಾಗುತ್ತಿದೆ.<br>6) ವಾರ್ಡ್ ನಂ. 12ರಲ್ಲಿ 0.5 ಟಿ.ಪಿ.ಡಿ ಯಷ್ಟು ಒಣತ್ಯಾಜ್ಯವನ್ನು ಕೇಂದ್ರೀಕೃತ ಸಂಗ್ರಹಣ ಘಟಕದಲ್ಲಿ ಬೇಲಿಂಗ್ ಯಂತ್ರದ ಮೂಲಕ ಪ್ಯಾಕಿಂಗ್ ಮಾಡಿ ಸಿಮೆಂಟ್ ಕಾರ್ಖಾನೆ ಹಾಗೂ ಸ್ಥಳೀಯ ಒಣತ್ಯಾಜ್ಯ ಮರು ಬಳಕೆದಾರರಿಗೆ ನೀಡಲಾಗುತ್ತಿದೆ.<br><br>ಪ್ರಸ್ತುತ ಘನತ್ಯಾಜ್ಯ ನಿರ್ವಹಣೆ ಕಾರ್ಯವನ್ನು ಯಾವುದೇ ಖಾಸಗಿ ಸಂಸ್ಥೆಗೆ ವಹಿಸದೆ ನಗರಸಭೆ ವತಿಯಿಂದ ನಿರ್ವಹಿಸಲಾಗುತ್ತಿದೆ. |
| (ಇ) | ಈ ಎರಡು ನಗರಗಳ ಘನತ್ಯಾಜ್ಯವನ್ನು ಸಮರ್ಪಕವಾಗಿ ವ್ಯವಸ್ಥಿತ ಜಾಗದಲ್ಲಿ ವಿಲೇವಾರಿ | ರಾಮನಗರ ಹಾಗೂ ಚನ್ನಪಟ್ಟಣ ನಗರಸಭೆಗೆ ಈಗಾಗಲೇ ಲಭ್ಯವಿರುವ ಜಾಗದಲ್ಲಿ ತ್ಯಾಜ್ಯ ಸಂಸ್ಕರಣೆ ಮಾಡಲು ಸಾರ್ವಜನಿಕರ ತೀವ್ರ ಪ್ರತಿರೋದವಿರುವುದರಿಂದ ತ್ಯಾಜ್ಯವನ್ನು ಸದರಿ ಸ್ಥಳದಲ್ಲಿ ವೈಜ್ಞಾನಿಕವಾಗಿ ನಿರ್ವಹಣೆ ಮಾಡಲು ಸಾಧ್ಯವಾಗಿರುವುದಿಲ್ಲ. ಆದ್ದರಿಂದ, ನಗರಸಭೆಗಳು |

| | | |
|---|---|---|
| | ಮಾಡದೆ, ನಗರದ ಸುತ್ತಮುತ್ತಲು ಸಾರ್ವಜನಿಕ ರಸ್ತೆ, ಕೆರೆ, ಕುಂಟೆಗಳಲ್ಲಿ ಹಾಗೂ ಖಾಲಿ ಜಾಗದಲ್ಲಿ ಸುರಿಯುತ್ತಿರುವುದರಿಂದ ಸಾರ್ವಜನಿಕರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರ ತೆಗೆದುಕೊಂಡ ಕ್ರಮವೇನು? | ಸಣ್ಣ ಪ್ರಮಾಣದ ವಿಕೇಂದ್ರೀಕೃತ ತ್ಯಾಜ್ಯ ಸಂಸ್ಕರಣೆ ಘಟಕಗಳನ್ನು ಅಭಿವೃದ್ಧಿಪಡಿಸಿ, ತ್ಯಾಜ್ಯ ಸಂಸ್ಕರಣೆಯನ್ನು ಕೈಗೊಳ್ಳಲಾಗುತ್ತಿದೆ. ಮುಂದುವರೆದು, ಸದರಿ ನಗರಗಳಲ್ಲಿ ತ್ಯಾಜ್ಯ ನಿರ್ವಹಣೆಯನ್ನು ಸಮರ್ಪಕವಾಗಿ ನಿರ್ವಹಿಸುವ ನಿಟ್ಟಿನಲ್ಲಿ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.<br><br>1. ನಗರಗಳಲ್ಲಿ ಉತ್ಪಾದನೆಯಾಗುವ ತ್ಯಾಜ್ಯವನ್ನು ಪೂರ್ಣ ಪ್ರಮಾಣದಲ್ಲಿ ಸಂಸ್ಕರಣೆ ಮಾಡಲು ಹೆಚ್ಚಿನ ಸಂಖ್ಯೆಯಲ್ಲಿ ವಿಕೇಂದ್ರೀಕೃತ ತ್ಯಾಜ್ಯ ಸಂಸ್ಕರಣೆ ಜಾಗಗಳನ್ನು ಗುರುತಿಸಿ ಅಭಿವೃದ್ಧಿ ಪಡಿಸಲು ಕ್ರಮ ವಹಿಸಲಾಗುತ್ತಿದೆ.<br>2. ಮೂಲದಲ್ಲಿಯೇ ತ್ಯಾಜ್ಯ ವಿಂಗಡಣೆ ಮಾಡಲು ಸಾರ್ವಜನಿಕರಿಗೆ ಅರಿವು ಮೂಡಿಸುವ ಸಲುವಾಗಿ ಐ.ಇ.ಸಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿರುತ್ತದೆ.<br>3. ಘನತ್ಯಾಜ್ಯ ವಸ್ತುಗಳನ್ನು ಎಲ್ಲೆಂದರಲ್ಲಿ ಅಥವಾ ರಸ್ತೆಬದಿಗಳಲ್ಲಿ, ನದಿ/ಕೆರೆ ಕಟ್ಟೆಗಳಲ್ಲಿ ವಿಲೇವಾರಿ ಮಾಡದಂತೆ ನಿರ್ದೇಶನಾಲಯದಿಂದ ಅಗತ್ಯ ಸೂಚನೆಗಳನ್ನು ನೀಡಲಾಗಿರುತ್ತದೆ.<br>4. ರಾಜ್ಯ ಸರ್ಕಾರವು ಜಾರಿಗೆ ತಂದಿರುವ SWM Model Bye-law ರೀತ್ಯಾ ಎಲ್ಲೆಂದರಲ್ಲಿ ತ್ಯಾಜ್ಯ ಎಸೆಯುವವರಿಗೆ ದಂಡ ವಿಧಿಸಿ ಜುಲ್ಮಾನೆ ಮೊತ್ತವನ್ನು ಸಂಗ್ರಹಿಸಲು ಕ್ರಮವಹಿಸಲಾಗುತ್ತಿದೆ.<br>5. ಸರ್ಕಾರದ ಆದೇಶ ಸಂಖ್ಯೆ: ನಅಇ 88 ಸಿಎಸ್‌ಎಸ್ 2021, ದಿನಾಂಕ: 19-04-2021 ರೀತ್ಯಾ ನಗರಸಭೆಗಳಿಗೆ ವಿಕೇಂದ್ರೀಕೃತ ತ್ಯಾಜ್ಯ ನಿರ್ವಹಣೆಗೆ ಅನುವಾಗುವಂತೆ ಪ್ರತಿ ಘಟಕಕ್ಕೆ ರೂ. 2.8 ಲಕ್ಷಗಳ ಅನುದಾನವನ್ನು ಮುಖ್ಯಮಂತ್ರಿ ನೈರ್ಮಲ್ಯ (ಸ್ವಚ್ಛ ಭಾರತ) ಯೋಜನೆಯಡಿ ಬಿಡುಗಡೆ ಮಾಡಲು ಕ್ರಮ ವಹಿಸಲಾಗುತ್ತಿದೆ.<br>6. ಎರಡೂ ನಗರಗಳಿಗೆ ಬದಲಿ ಜಾಗವನ್ನು ಗುರುತಿಸಿ ನಗರಸಭೆಗೆ ಹಸ್ತಾಂತರಿಸಲು ನಗರಸಭೆಗಳಿಂದ ಜಿಲ್ಲಾಧಿಕಾರಿಗಳಿಗೆ ಪ್ರಸ್ತಾವನೆ ಸಲ್ಲಿಸಲಾಗಿದ್ದು, ಬದಲಿ ಜಾಗವನ್ನು ಗುರುತಿಸುವ ಪ್ರಕ್ರಿಯೆ ಜಾರಿಯಲ್ಲಿರುತ್ತದೆ. |

ಸಂಖ್ಯೆ: ನಅಇ 166 ಸಿಎಸ್‌ಎಸ್ 2021

(ಎನ್. ನಾಗರಾಜ್ (ಎಂ.ಟಿ.ಬಿ.))
ಪೌರಾಡಳಿತ, ಸಣ್ಣ ಕೈಗಾರಿಕೆ, ಸಾರ್ವಜನಿಕ ವಲಯ ಉದ್ಯಮಗಳ ಸಚಿವರು.